## ಕರ್ನಾಟಕ ವಿಧಾನ ಪರಿಷತ್

## 140ನೇ ಅಧಿವೇಶನ -2020

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ. | 535 |
| ಮಾನ್ಯ ಸದಸ್ಯರ ಹೆಸರು | ಶ್ರೀ ಐವನ್ ಡಿ'ಸೋಜಾ (ನಾಮನಿರ್ದೇಶನ ಹೊಂದಿದವರು)) |
| ಉತ್ತರಿಸಬೇಕಾದ ಸಚಿವರು | ಮಾನ್ಯ ಉಪಮುಖ್ಯಮಂತ್ರಿಗಳು(ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 09.03.2020 |

| | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಹೈಯರ್ ಎಜುಕೇಷನ್ ಕೌನ್ಸಿಲ್ ಉನ್ನತ ಶಿಕ್ಷಣದ ಗುಣಮಟ್ಟ ಹೆಚ್ಚಿಸಲು 2018-19, 2019ರಲ್ಲಿ ನೀಡಿದ ಸಲಹೆಗಳಾವುವು; ಅನುಷ್ಠಾನಗೊಂಡ ಸಲಹೆಗಳಾವುವು; (ವಿವರ ನೀಡುವುದು) | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನಿಂದ 2018-19 ಹಾಗೂ 2019-20ನೇ ಸಾಲಿನಲ್ಲಿ ನೀಡಲಾದ ಸಲಹೆಗಳ ಹಾಗೂ ಸದರಿ ಸಲಹೆಗಳನ್ನು ಪರಿಗಣಿಸಿದ/ಅನುಷ್ಠಾನಗೊಳಿಸಿದ ವಿವರಗಳನ್ನು ಅನುಕ್ರಮವಾಗಿ ಅನುಬಂಧ-1 ಮತ್ತು ಅನುಬಂಧ-2 ರಲ್ಲಿ ಒದಗಿಸಲಾಗಿದೆ |
| ಆ | ಹೊಸ ಶಿಕ್ಷಣ ನೀತಿ ಜಾರಿಗೆ ತರಲು ಇಲಾಖೆ ಮುಂದೆ ಇರುವ ಯೋಜನೆಗಳಾವುವು; (ವಿವರ ನೀಡುವುದು) | ರಾಜ್ಯದ ಎಲ್ಲಾ ವಿಶ್ವವಿದ್ಯಾಲಗಳ ಕುಲಪತಿಗಳು, ವಿಶ್ರಾಂತ ಕುಲಪತಿಗಳು, ಎನ್‌ಸಿಟಿಇ/ಎನ್.ಐ.ಟಿ. ನಿರ್ದೇಶಕರು, ವಿಷಯ ಪಾರಂಗತರು, ಶೈಕ್ಷಣಿಕ ತಜ್ಞರು ಮತ್ತು ರಾಷ್ಟ್ರೀಯ ಶಿಕ್ಷಣ ನೀತಿ 2019ರ ಸಮಿತಿಯ ಸದಸ್ಯರಾದ ಪ್ರೊ.ಎಂ.ಕೆ.ಶ್ರೀಧರ್ ಇವರಿಂದ ಪಡೆಯಲಾದ ಅಭಿಪ್ರಾಯ ಹಾಗೂ ಸಲಹೆಗಳನ್ನು ಪರಿಶೀಲಿಸಿ, ರಾಜ್ಯದ ನಿಲುವನ್ನು ವ್ಯಕ್ತಪಡಿಸಲು ಶ್ರೀ ಎಸ್.ವಿ.ರಂಗನಾಥ, ನಿವೃತ್ತ ಭಾ.ಆ.ಸೇ ಅಧಿಕಾರಿ ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ತಜ್ಞರ ಸಮಿತಿಯು ಸಲ್ಲಿಸಿದ್ದ ವರದಿಯನ್ನು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆಗೆ ಕಳುಹಿಸಲಾಗಿದೆ.<br>ದೇಶದಲ್ಲಿ ಮುಂಚೂಣಿಯಾಗಿರುವಂತೆ ಶಿಕ್ಷಣ ನೀತಿಯನ್ನು ರೂಪಿಸಲು ಹಾಗೂ ಶಿಕ್ಷಣ ನೀತಿಯನ್ನು ರೂಪಿಸುವಲ್ಲಿ ಇತರೆ ರಾಜ್ಯಗಳಿಗೆ ಮಾದರಿಯಾಗಿ ಕಾರ್ಯನಿರ್ವಹಿಸಲು ಶ್ರೀ ಎಸ್.ವಿ.ರಂಗನಾಥ, ನಿವೃತ್ತ ಭಾ.ಆ.ಸೇ ಅಧಿಕಾರಿ ಇವರ ಅಧ್ಯಕ್ಷತೆಯಲ್ಲಿ ಅನುಷ್ಠಾನ ಕಾರ್ಯಪಡೆಯನ್ನು ರಚಿಸಲು ಕ್ರಮವಹಿಸಲಾಗಿದೆ. |

| | | |
|---|---|---|
| ಇ | ಕರ್ನಾಟಕ ಹೈಯರ್ ಎಜುಕೇಷನ್ ಕೌನ್ಸಿಲ್ ನೀಡಿದ ಸಲಹೆಗಳನ್ನು ಇಲಾಖೆ ಜಾರಿಗೆ ತಂದಿದಿಯೇ; ಇದರಲ್ಲಿ ಸದಸ್ಯರುಗಳ ಸಂಖ್ಯೆ ಎಷ್ಟು; | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನಿಂದ 2018-19 ಹಾಗೂ 2019-20ನೇ ಸಾಲಿನಲ್ಲಿ ನೀಡಲಾದ ಸಲಹೆಗಳನ್ನು ಪರಿಗಣಿಸಿದ/ಅನುಷ್ಠಾನಗೊಳಿಸಿದ ವಿವರಗಳನ್ನು ಅನುಬಂಧ-1 ಮತ್ತು ಅನುಬಂಧ-2 ರಲ್ಲಿ ಒದಗಿಸಲಾಗಿದೆ.<br>ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು ಅಧಿನಿಯಮ, 2010ರ ಪ್ರಕರಣ 3(1)ರನ್ವಯ ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತು ಒಟ್ಟು 55 ಸದಸ್ಯರುಗಳನ್ನು ಒಳಗೊಂಡಿರುತ್ತದೆ |
| ಈ | ಕರ್ನಾಟಕ ಹೈಯರ್ ಎಜುಕೇಷನ್ ಕೌನ್ಸಿಲ್ ನಲ್ಲಿರುವ ಅಧ್ಯಕ್ಷರು ಮತ್ತು ಸದಸ್ಯರುಗಳು ತಮ್ಮ ಕೆಲಸದ ಒತ್ತಡದಿಂದ ಉನ್ನತ ಶಿಕ್ಷಣಕ್ಕೆ ಸಲಹೆ ನೀಡಲು ಸಾಧ್ಯವಾಗುತ್ತಿಲ್ಲ ಎಂಬ ಮಾಹಿತಿ ಇದ್ದು, ಈ ಬಗ್ಗೆ ಕೈಗೊಂಡ ಕ್ರಮಗಳೇನು? | ಕಛೇರಿ ಕಾರ್ಯದೊತ್ತಡದ ಮಧ್ಯೆಯೂ ಅಧ್ಯಕ್ಷರು ಹಾಗೂ ಸದಸ್ಯರುಗಳು ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ಸಭೆಗಳಲ್ಲಿ ಭಾಗವಹಿಸಿ ನಿಯತವಾಗಿ ಪರಿಗಣಿತ ಅಭಿಪ್ರಾಯ/ಸಲಹೆಗಳನ್ನು ನೀಡುತ್ತಿದ್ದಾರೆ. |

ಇಡಿ/ 60 /ಯುಆರ್‌ಸಿ/2020

(ಡಾ|| ಅಶ್ವಥ್‌ನಾರಾಯಣ ಸಿ.ಎನ್)

ಉಪಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)

ಅನುಬಂಧ-1

ಶೈಕ್ಷಣಿಕ ಗುಣಮಟ್ಟ ಹೆಚ್ಚಿಸಲು ಉನ್ನತ ಶಿಕ್ಷಣ ಪರಿಷತ್ತಿನಿಂದ
ನೀಡಿದ ಸಲಹೆಗಳು ಮತ್ತು ಅನುಷ್ಠಾನಗೊಂಡ ಸಲಹೆಗಳ ವಿವರಗಳು

**2018-19**

| ಕ್ರಮ. ಸಂ. | ಗುಣಮಟ್ಟ ಹೆಚ್ಚಿಸಲು ನೀಡಿದ ಸಲಹೆಗಳು | ಸಲಹೆಗಳನ್ನು ಪರಿಹಣಿಸಿದ ಹಾಗೂ ಅನುಷ್ಠಾನಗೊಳಸಿದ ವಿವರಗಳು |
|---|---|---|
| 1 | ವಿಶ್ವವಿದ್ಯಾಲಯಗಳನ್ನು ಮಾದಕ ದ್ರವ್ಯ ಮುಕ್ತಗೊಳಸಲು ರಾಜ್ಯದ ವಿಶ್ವವಿದ್ಯಾಲಯಗಳ ಕುಲಪತಿಗಳು, ಕುಲಸಚಿವರ ಸಭೆಯನ್ನು ಏರ್ಪಡಿಸುವ ಬಗ್ಗೆ-<br><br>ಮಾದಕ ದ್ರವ್ಯಗಳಿಂದ ಆಗುವ ಪರಿಣಾಮಗಳ ಬಗ್ಗೆ ನುರಿತ ತಜ್ಞರಿಂದ ವಿದ್ಯಾರ್ಥಿಗಳಿಗೆ ತಿಳಹೇಳುತ್ತಾ, ಮಾದಕ ದ್ರವ್ಯಗಳ ಬಗ್ಗೆ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಮತ್ತು ಕಾಲೇಜುಗಳಲ್ಲಿ ವರ್ಷಕ್ಕೆ ಕನಿಷ್ಠ ಒಂದು ಬಾರಿಯಾದರು ಜಾಗೃತಿ ಕಾರ್ಯಕ್ರಮವನ್ನು ಕಡ್ಡಾಯವಾಗಿ ನಡೆಸಬೇಕೆಂದು ಸಲಹೆ ನೀಡಲಾಗಿದೆ. | ಎಲ್ಲಾ ವಿಶ್ವವಿದ್ಯಾಲಯಗಳಿಗೂ ಸೂಚನೆಗಳನ್ನು ನೀಡಲಾಗಿದೆ |
| 2 | ಕಲಬುರಗಿಯಲ್ಲಿ ಉರ್ದು ವಿಶ್ವವಿದ್ಯಾಲಯ ಪ್ರಾರಂಭಿಸುವ ಕುರಿತು-<br><br>ಕಲಬುರಗಿಯಲ್ಲಿ ಉರ್ದು ವಿಶ್ವವಿದ್ಯಾಲಯ ಪ್ರಾರಂಭಿಸುವ ಕುರಿತು ನಡೆದ ಚರ್ಚೆಯಲ್ಲಿ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಉರ್ದು ವಿಭಾಗಳನ್ನು ನಡೆಸಲಾಗುತ್ತಿದ್ದು, ಅವುಗಳಿಗೆ ಆರ್ಥಿಕ ಸೌಲಭ್ಯ ಸಾಲುತ್ತಿಲ್ಲ ಮತ್ತು ಈ ವಿಷಯಕ್ಕೆ ವಿದ್ಯಾರ್ಥಿಗಳ ಕೊರತೆ ಇರುವುದರಿಂದ ಸದರಿ ಪ್ರಸ್ತಾವನೆಯನ್ನು ಕೈಬಿಡುವಂತೆ ಸಭೆಯ ಅಭಿಪ್ರಾಯದಂತೆ ಸಲಹೆ ನೀಡಲಾಗಿದೆ. | ಸಲಹೆಯನ್ನು ಉನ್ನತ ಶಿಕ್ಷಣ ಇಲಾಖೆಯಿಂದ ಪರಿಗಣಿಸಲಾಗಿದೆ. |
| 3 | ಪಿಹೆಚ್.ಡಿ ವ್ಯಾಸಂಗ ಮಾಡುತ್ತಿರುವ ಅವಧಿಯನ್ನು ನೇರ ನೇಮಕಾತಿ/ ಪದೋನ್ನತಿಗೆ ಪರಿಗಣಿಸುವ ಬಗ್ಗೆ .<br><br>ಪಿಹೆಚ್.ಡಿ ವ್ಯಾಸಂಗ ಮಾಡುತ್ತಿರುವ ಅವಧಿಯನ್ನು ನೇರ ನೇಮಕಾತಿ/ಪದೋನ್ನತಿಗೆ ಪರಿಗಣಿಸುವ ಕುರಿತು ಇತ್ತೀಚಿನ ಯು.ಜಿ.ಸಿಯು ಹೊರಡಿಸಿರುವ ನಿಯಮಾವಳಗಳ ಪ್ರಕಾರ ಕ್ರಮಕೈಗೊಳ್ಳುವಂತೆ ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗುತ್ತದೆ. ಅದಾಗ್ಯೂ ಕಡತ ಸಂಖ್ಯೆ:ಇಡಿ 19 ಯುಎನ್ಇ 2018ರಲ್ಲಿ ಪರಿಶೀಲಿಸಿ ವಿಶ್ವವಿದ್ಯಾಲಯಗಳಿಗೆ ಸೂಚನೆಗಳನ್ನು ನೀಡಲಾಗಿದೆ.. |

| | | |
|---|---|---|
| 4 | ವಿಶ್ವವಿದ್ಯಾಲಯ ಪನರಾವಲೋಕನ ಆಯೋಗವು"Functiong of Chairs/ Peethas instituted in various State Universities"ವಿಷಯದ ಕುರಿತು ಸಲ್ಲಿಸಿರುವ ವರದಿಯ ಬಗ್ಗೆ-<br><br>ವಿಶ್ವವಿದ್ಯಾಲಯ ಪನರಾವಲೋಕನ ಆಯೋಗವು"Functiong of Chairs/ Peethas instituted in various State Universities"ವಿಷಯದ ಕುರಿತು ಸಲ್ಲಿಸಿರುವ ವರದಿಯ ಕುರಿತಂತೆ ಸರ್ಕಾರದ ವತಿಯಿಂದ ಈ ಅಧ್ಯಯನ ಪೀಠಗಳ ಬಗ್ಗೆ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಗೆ ಹೆಚ್ಚಿನ ಅಗತ್ಯ ನೀಡಬೇಕು ಮತ್ತು ಸಂಶೋಧನೆಯಿಂದ ಬಂದ ಫಲಿತಾಂಶವನ್ನು ಪಠ್ಯ-ಪುಸ್ತಕದೊಂದಿಗೆ ಅಥವಾ ಬೇರೆ ರೀತಿಯಲ್ಲಿ ಜಾರಿಗೆ ತರುವ ಪ್ರವೃತ್ತಿಯನ್ನು ಆರಂಭಿಸಬೇಕೆಂದು ತಿಳಿಸಿ, ಈ ವಿಶ್ವವಿದ್ಯಾಲಯಗಳಲ್ಲಿ ವಿವಿಧ ಜಯಂತಿಗಳಿಗೆ ರಜಾ ಕೊಡುವುದನ್ನು ನಿಲ್ಲಿಸಿ, ಜಯಂತಿ ಕಾರ್ಯಕ್ರಮಗಳಲ್ಲಿ ಭಾಷಣ ಮಾಡುವ ಬದಲು, ಆಯಾ ಜಯಂತಿಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸುವ ಬಗ್ಗೆ ಕ್ರಮ ಕೈಗೊಳ್ಳಬೇಕೆಂದು ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ. |
| 5 | ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು ಇವರ ಮನವಿಯಲ್ಲಿ<br>1. ಕರ್ನಾಟಕ ಸರ್ಕಾರವು ಪ್ರಾಥಮಿಕ ಹಂತದಿಂದ ಸ್ನಾತಕೋತ್ತರ ಶೈಕ್ಷಣಿಕ ವರ್ಗಗಳವರೆಗಿನ ಎಲ್ಲಾ ಪಠ್ಯಗಳಲ್ಲಿ ಶರಣರ ವಚನಗಳನ್ನು ಕಡ್ಡಾಯವಾಗಿ ಅಳವಡಿಸುವುದು.<br>2. ಬಸವಕಲ್ಯಾಣದಲ್ಲಿ ನಿರ್ಮಾಣವಾಗಲಿರುವ "ಅನುಭವ ಮಂಟಪ"ಕ್ಕೆ ಹೊಂದಿಕೊಂಡಂತೆ "ವಚನ ವಿಶ್ವವಿದ್ಯಾಲಯ"ವನ್ನು ಸ್ಥಾಪಿಸುವುದು.<br><br>ಕೂಡಲ ಸಂಗಮದಲ್ಲಿ ಡಿಪ್ಲೋಮ ಮತ್ತು ಸ್ನಾತಕೋತ್ತರ ಕೋರ್ಸ್‌ಗಳನ್ನು (Recognised Courses Only)ಪ್ರಾರಂಭಿಸಲು ಗುಲ್ಬರ್ಗಾ ವಿಶ್ವವಿದ್ಯಾಲಯದ ಕುಲಪತಿಗಳಿಗೆ ಸೂಚಿಸಲಾಯಿತು. ಈ ಪದವಿಗಳನ್ನು ಪೂರೈಸಿದ ವಿದ್ಯಾರ್ಥಿಗಳಿಗೆ ಉದ್ಯೋಗಾವಕಾಶಗಳು ಇಲ್ಲದ ಕಾರಣ ಪ್ರತ್ಯೇಕ ವಿಶ್ವವಿದ್ಯಾಲಯದ ಅವಶ್ಯಕತೆ ಇಲ್ಲವೆಂದು ಸಭೆಯ ಅಭಿಪ್ರಾಯದಂತೆ ಸಲಹೆ ನೀಡಲಾಯಿತು. | ಸಲಹೆಯನ್ನು ಪರಿಗಣಿಸಲಾಗಿದೆ |
| 6 | ಪ್ರಥಮ ಪದವಿ ತರಗತಿಗಳಿಗೆ ಸಂವಿಧಾನವನ್ನು ಕಡ್ಡಾಯ ವಿಷಯವಾಗಿ ರಾಜ್ಯಶಾಸ್ತ್ರ ಅಥವಾ ಕಾನೂನು ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿರುವ ಉಪನ್ಯಾಸಕರು ಬೋಧಿಸುವ ಬಗ್ಗೆ- ಪ್ರಥಮ ಪದವಿ ತರಗತಿಗಳಿಗೆ ಸಂವಿಧಾನವನ್ನು ಕಡ್ಡಾಯ ವಿಷಯವಾಗಿ ರಾಜ್ಯಶಾಸ್ತ್ರ ಅಥವಾ ಕಾನೂನು ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿರುವ ಉಪನ್ಯಾಸಕರು ಬೋಧಿಸುವಂತೆ ಹಾಗೂ ಈಗಾಗಲೇ ಹಾಲಿ ಇರುವ 04 ಗಂಟೆಗಳ ಅವಧಿಯನ್ನೆ ಮುಂದುವರಿಸಬೇಕೆಂದು ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ. |

| | | |
|---|---|---|
| 7 | ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯವು ಬಿಡುಗಡೆಗೊಳಿಸಿರುವ 2018ರNIRF (National Institutional Ranking Framework) ರ್‍ಯಾಂಕಿಂಗ್ ನಲ್ಲಿ ಕುವೆಂಪು ವಿಶ್ವವಿದ್ಯಾಲಯ 79ನೇ ರ್‍ಯಾಂಕ್ ಪಡೆದಿರುವ ಕುರಿತು–<br>ಎಲ್ಲಾ ವಿಶ್ವವಿದ್ಯಾಲಯಗಳು ಇದೇ ರೀತಿ ಉನ್ನತ ಮಟ್ಟಕ್ಕೇರಲು ಅಗತ್ಯ ಕ್ರಮ ಕೈಗೊಳ್ಳಬೇಕೆಂದು ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ.. |
| 8 | University Grants Commission "Quality Mandate".<br>University Grants Commission "Quality Mandate" ಈ ಪ್ರಸ್ತಾವನೆಯಲ್ಲಿ ತಿಳಿಸಿದ ಪ್ರಕಾರ ಎಲ್ಲಾ ವಿಶ್ವವಿದ್ಯಾಲಯದ ಕುಲಪತಿಗಳಿಗೆ ಕ್ರಮವಹಿಸಲು ಸಲಹೆ ನೀಡಲಾಯಿತು | ಎಲ್ಲಾ ವಿಶ್ವವಿದ್ಯಾಲಯದ ಕುಲಪತಿಗಳಿಗೆ ಸಭೆಯಲ್ಲಿ ಕ್ರಮವಹಿಸಲು ಸಲಹೆ ನೀಡಲಾಯಿತು |
| 9 | SWAYAM courses: online courses<br>ಎಂ.ಹೆಚ್.ಆರ್.ಡಿ ಜಾರಿಗೆ ತಂದಿರುವ ಈ ಕೆಳಕಂಡ ಅಂಶಗಳ ಬಗ್ಗೆ ಸಭೆಯಲ್ಲಿ ವಿವರಿಸಿ ಕ್ರಮವಹಿಸಲು ಎಲ್ಲಾ ಕುಲಪತಿಗಳು ಮತ್ತು ಎಲ್ಲಾ ಸದಸ್ಯರ ಗಮನಕ್ಕೆ ತರಲಾಯಿತು.<br>MHRD came out with thousands of massive open online courses available by the best teachers from top institutions. These courses can access by anyone, anytime, anywhere and learn through mobile or laptop absolutely free. These courses can be not only for engineering students but also for Non-Engineering graduate students/P.G Students. These courses can be access through MHRD portal.<br>It is resolved all the Vice Chancellors of the Universities make an effort to introduce these courses in their respective universities and affiliated colleges. | ಎಂ.ಹೆಚ್.ಆರ್.ಡಿ ಜಾರಿಗೆ ತಂದಿರುವ ಈ ಕೆಳಕಂಡ ಅಂಶಗಳ ಬಗ್ಗೆ ಸಭೆಯಲ್ಲಿ ವಿವರಿಸಿ ಕ್ರಮವಹಿಸಲು ಎಲ್ಲಾ ಕುಲಪತಿಗಳು ಮತ್ತು ಎಲ್ಲಾ ಸದಸ್ಯರ ಗಮನಕ್ಕೆ ತರಲಾಯಿತು. |
| 10 | ರಾಜ್ಯದ ಖಾಸಗಿ ವಿಶ್ವವಿದ್ಯಾಲಯಗಳ ಕುಲಪತಿಗಳ ವಯೋಮಿತಿ ಮತ್ತು ನೇಮಕಾತಿ ಬಗ್ಗೆ–<br>ಯು.ಜಿ.ಸಿ ನಿಯಮಾವಳಿಗಳ ಪ್ರಕಾರ ಕ್ರಮವಹಿಸುವಂತೆ ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ. |

| | | |
|---|---|---|
| 11 | ಕುಲಪತಿಗಳು, ಮಂಗಳೂರು ವಿಶ್ವವಿದ್ಯಾಲಯ ಇವರು ಮಾತನಾಡಿ ವಿಶ್ವವಿದ್ಯಾಲಯಗಳಲ್ಲಿ ಯೋಗ, ಕ್ರೀಡೆ ಮತ್ತು ದೈಹಿಕ ಶಿಕ್ಷಣದ ವಿಷಯಗಳನ್ನು ಪದವಿ ಶಿಕ್ಷಣದಲ್ಲಿ ಅಳವಡಿಸಬೇಕೆಂದು ತಿಳಿಸಿದರು. ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ರಾಜ್ಯ/ರಾಷ್ಟ್ರೀಯ/ ಅಂತರಾಷ್ಟ್ರೀಯ ದೈಹಿಕ ಶಿಕ್ಷಣ ಮತ್ತು ಕ್ರೀಡೆಗಳಲ್ಲಿ ಭಾಗವಹಿಸುವ ವಿದ್ಯಾರ್ಥಿಗಳಿಗೆ ಮರುಪರೀಕ್ಷೆ ಬರೆಯಲು ಅವಕಾಶ ಮಾಡಿಕೊಡಬೇಕೆಂದು ಕೋರಿದರು. ಈ ಬಗ್ಗೆ ಮಾನ್ಯ ಸಚಿವರು ದೈಹಿಕ ಶಿಕ್ಷಣ ಮತ್ತು ಕ್ರೀಡೆಗಳಲ್ಲಿ ಭಾಗವಿಸುವ ವಿದ್ಯಾರ್ಥಿಗಳಿಗೆ ಮರುಪರೀಕ್ಷೆ ಬರೆಯಲು ಆಯಾ ವಿಶ್ವವಿದ್ಯಾಲಯಗಳ ಹಂತದಲ್ಲಿಯೇ ಕ್ರಮಕೈಗೊಳ್ಳಬೇಕೆಂದು ಸೂಚಿಸಿದರು ಮತ್ತು ಪ್ರತಿ ವಿದ್ಯಾರ್ಥಿಗಳಿಗೆ ಯೋಗಾಭ್ಯಾಸ ನೀಡಬೇಕೆಂದು ತಿಳಿಸಿದರು.<br><br>ಕ್ರೀಡೆಗಳಲ್ಲಿ ಭಾಗವಹಿಸುವ ವಿದ್ಯಾರ್ಥಿಗಳಿಗೆ ಮರುಪರೀಕ್ಷೆ ಬರೆಯಲು ಅವಕಾಶ ಕಲ್ಪಿಸುವ ಬಗ್ಗೆ ಹಾಗೂ ಕಲೆ, ಸಾಹಿತ್ಯ, ಯೋಗ, ಕ್ರೀಡೆ ಮತ್ತು ದೈಹಿಕ ಶಿಕ್ಷಣದ ವಿಷಯಗಳನ್ನು ಪದವಿ ಶಿಕ್ಷಣದಲ್ಲಿ ಅಳವಡಿಸಿಕೊಳ್ಳಲು ಆಯಾ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಕ್ರಮಕೈಗೊಳ್ಳಬೇಕೆಂದು ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ.. |

# ಅನುಬಂಧ-2
## 2019-20

| ಕ್ರಮ. ಸಂ. | ಗುಣಮಟ್ಟ ಹೆಚ್ಚಿಸಲು ನೀಡಿದ ಸಲಹೆಗಳು | ಸಲಹೆಗಳನ್ನು ಪರಿಹಣಿಸಿದ ಹಾಗೂ ಅನುಷ್ಠಾನಗೊಳಿಸಿದ ವಿವರಗಳು |
|---|---|---|
| 1 | ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಸಂಬಂಧದಲ್ಲಿ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳು/ಡೀಮ್ಡ್ ವಿಶ್ವವಿದ್ಯಾಲಯಗಳು/ಸ್ವಾಯತ್ತ ಪದವಿ ಕಾಲೇಜುಗಳು/ಕಾನೂನು ಕಾಲೇಜುಗಳಲ್ಲಿ ಅಂಕಪಟ್ಟಿಗಳನ್ನು ದ್ವಿಭಾಷೆಯಲ್ಲಿ (ಆಂಗ್ಲ ಮತ್ತು ಕನ್ನಡ ಭಾಷೆ) ವಿತರಿಸುವ ಕುರಿತು-<br>ರಾಜ್ಯದ ಎಲ್ಲಾ ವಿಶ್ವಾವಿದ್ಯಾಲಯಗಳು ಕಡ್ಡಾಯವಾಗಿ ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ಅಂಕಪಟ್ಟಿಗಳನ್ನು ಮುದ್ರಿಸಿ ವಿತರಿಸಬೇಕೆಂದು ಹಾಗೂ ಸಂಸ್ಕೃತ ವಿಶ್ವವಿದ್ಯಾಲಯವು ಪ್ರಸ್ತುತ ಸಂಸ್ಕೃತ ಮತ್ತು ಆಂಗ್ಲ ಭಾಷೆಯಲ್ಲಿ ಅಂಕಪಟ್ಟಿಗಳನ್ನು ಮುದ್ರಿಸುತ್ತಿರುವುದರಿಂದ, ಸಂಸ್ಕೃತ ವಿಶ್ವವಿದ್ಯಾಲಯವು ಮಾತ್ರ ಸಂಸ್ಕೃತ ಮತ್ತು ಆಂಗ್ಲ ಭಾಷೆಗಳಲ್ಲಿ ಅಂಕಪಟ್ಟಿಗಳನ್ನು ಮುದ್ರಿಸಿ ವಿತರಿಸುವಂತೆ ಸಲಹೆ ನೀಡಲಾಯಿತು | ಸರ್ಕಾರದ ಪತ್ರಸಂಖ್ಯೆ:ಇಡಿ 304 ಯುಎನ್ಇ 2019, ದಿನಾಂಕ:21.01.2020ರಲ್ಲಿ ಉನ್ನತ ಶಿಕ್ಷಣ ಇಲಾಖೆಯಡಿಯ ಎಲ್ಲಾ ವಿಶ್ವವಿದ್ಯಾಲಯಗಳು ಹಾಗೂ ಅಧೀನ ಇಲಾಖೆಗಳಿಗೆ ಸೂಚನೆಗಳನ್ನು ನೀಡಲಾಗಿದೆ |
| 2 | ಬೀದರ್ ಜಿಲ್ಲೆಯಲ್ಲಿ ಭಾಯಿ ಸಾಹೇಬ್ ಸಿಂಗ್ ಹೆಸರಿನಲ್ಲಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಕುರಿತು-<br>ಬೀದರ್‌ನಲ್ಲಿ ಭಾಯಿ ಸಾಹೇಬ್ ಸಿಂಗ್ ಹೆಸರಿನಲ್ಲಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಕೈಬಿಡುವಂತೆ ಸಭೆಯ ಅಭಿಪ್ರಾಯದಂತೆ ಸಲಹೆ ನೀಡಲಾಯಿತು. | ಸಲಹೆಯನ್ನು ಪರಿಗಣಿಸಲಾಗಿದೆ. |
| 3 | ಬೆಳಗಾವಿ ಜಿಲ್ಲೆಯಲ್ಲಿ ಮೈಸೂರು ಹುಲಿ ಟಿಪ್ಪು ಸುಲ್ತಾನ್ ಹೆಸರಿನಲ್ಲಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಕುರಿತು-<br>ಬೆಳಗಾವಿ ಜಿಲ್ಲೆಯಲ್ಲಿ ಮೈಸೂರು ಹುಲಿ ಟಿಪ್ಪು ಸುಲ್ತಾನ್ ಹೆಸರಿನಲ್ಲಿ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಕೈಬಿಡುವಂತೆ ಸಭೆಯ ಅಭಿಪ್ರಾಯದಂತೆ ಸಲಹೆ ನೀಡಲಾಯಿತು. | ಸಲಹೆಯನ್ನು ಪರಿಗಣಿಸಲಾಗಿದೆ . |
| 4 | ವಾಣಿಜ್ಯ ಮತ್ತು ನಿರ್ವಹಣಾ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಬಗ್ಗೆ-<br>ರಾಜ್ಯದಲ್ಲಿ ಪ್ರತ್ಯೇಕವಾಣಿಜ್ಯ ಮತ್ತು ನಿರ್ವಹಣಾ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಪ್ರಸ್ತಾವನೆಯನ್ನು ಕೈಬಿಡುವಂತೆ ಸಭೆಯ ಅಭಿಪ್ರಾಯದಂತೆ ಸಲಹೆ ನೀಡಲಾಯಿತು. | ಸಲಹೆಯನ್ನು ಪರಿಗಣಿಸಲಾಗಿದೆ |

| | | |
|---|---|---|
| 5 | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿರುವ ಪದವಿ ಕೋರ್ಸ್‌ಗಳ ವಿದ್ಯಾರ್ಥಿ ಪ್ರಮಾಣವನ್ನು ಹೆಚ್ಚಿಸಲು ಅನುಮತಿ ಕೋರಿರುವ ಬಗ್ಗೆ-<br>ರಾಜ್ಯದ ಕಾಲೇಜುಗಳಲ್ಲಿ ವಿದ್ಯಾರ್ಥಿ ಪ್ರಮಾಣ ಮಿತಿಯು ಪೂರ್ಣಗೊಂಡ ನಂತರ ಪ್ರವೇಶಾತಿ ಬಯಸಿ ಬರುವ ವಿದ್ಯಾರ್ಥಿಗಳಿಗೆ ಪ್ರವೇಶಾತಿ ನೀಡಬೇಕೆಂದು ಹಾಗೂ ಕಾಲೇಜುಗಳಲ್ಲಿ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸಿ, ಜೊತೆಯಲ್ಲಿ ಶಿಕ್ಷಣದ ಕುರಿತು ಗುಣಮಟ್ಟದ ಭರವಸೆ ನೀಡಿ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡಲು ಅನುವು ಮಾಡಿಕೊಡಲು ಕ್ರಮವಹಿಸುವಂತೆ ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ.. |
| 6 | ರಾಜ್ಯದ ವಿಶ್ವವಿದ್ಯಾಲಯಗಳ ಅಧೀನಕ್ಕೊಳಪಡುವ ಮಹಾವಿದ್ಯಾಲಯದ ಅಧ್ಯಾಪಕರುಗಳಿಗೆ ಏಕರೂಪ ಪದವಿ ಪರೀಕ್ಷೆಗಳ ಮೌಲ್ಯಮಾಪನ ಭತ್ಯೆಗಳ ಕುರಿತು ತಜ್ಞರ ಸಮಿತಿಯ ವರದಿ ಬಗ್ಗೆ-<br><br>ರಾಜ್ಯದ ವಿಶ್ವವಿದ್ಯಾಲಯಗಳ ಅಧೀನಕ್ಕೊಳಪಡುವ ಮಹಾವಿದ್ಯಾಲಯದ ಅಧ್ಯಾಪಕರುಗಳಿಗೆ ಏಕರೂಪ ಪದವಿ ಪರೀಕ್ಷೆಗಳ ಮೌಲ್ಯಮಾಪನ ಭತ್ಯೆಗಳ ಕುರಿತು ತಜ್ಞರ ಸಮಿತಿಯ ವರದಿಯಂತೆ ಮುಂದಿನ ಕ್ರಮವಹಿಸುವ ಕುರಿತು ಸಲಹೆ ನೀಡಲಾಯಿತು. | ಇತರೆ ರಾಜ್ಯಗಳಲ್ಲಿರುವ ಕ್ರಮವ್ಯವಸ್ಥೆಯ ಬಗ್ಗೆ ಮಾಹಿತಿ ಪಡೆದು ವರದಿ ಸಲ್ಲಿಸಲು ಕರ್ನಾಟಕ ರಾಜ್ಯ ಉನ್ನತ ಶಿಕ್ಷಣಪರಿಷತ್ತಿಗೆ ತಿಳಿಸಲಾಗಿದೆ |
| 7 | ರಾಜ್ಯ ಮಟ್ಟದ ಗುಣಮಟ್ಟ ಭರವಸೆ ಸಮಿತಿಯನ್ನು(State Level Quality Assurance Committee-SLQAC)ಸ್ಥಾಪಿಸುವ ಕುರಿತು ತಜ್ಞರ ಸಮಿತಿಯು ಸಲ್ಲಿಸಿರುವ ವರದಿಯ ಬಗ್ಗೆ-<br><br>ರಾಜ್ಯ ಮಟ್ಟದ ಗುಣಮಟ್ಟ ಭರವಸೆ ಸಮಿತಿಯನ್ನು(State Level Quality Assurance Committee-SLQAC)ಸ್ಥಾಪಿಸುವ ಕುರಿತು ತಜ್ಞರ ಸಮಿತಿಯು ಸಲ್ಲಿಸಿರುವ ವರದಿಯನ್ನು ಪರಿಶೀಲಿಸಿ ಸಭೆಯ ತೀರ್ಮಾನದಂತೆ ಕ್ರಮವಹಿಸುವ ಕುರಿತು ಸಲಹೆ ನೀಡಲಾಯಿತು. | ಪರಿಷತ್ತಿನ ಸಲಹೆಯಂತೆ ತುರ್ತು ಅಗತ್ಯ ಕ್ರಮವಹಿಸಲು ಅನಧಿಕೃತ ಟಿಪ್ಪಣಿ ಸಂಖ್ಯೆ:ಇಡಿ 302 ಯುಎನ್‌ಇ 2019, ದಿನಾಂಕ:14.02.2020 ಇ-ಸಮನ್ವಯಾಧಿಕಾರಿ, ಇ-ಆಡಳಿತ, ಉನ್ನತ ಶಿಕ್ಷಣ ಇಲಾಖೆ ಇವರಿಗೆ ತಿಳಿಸಲಾಗಿದೆ |
| 8 | ಕುವೆಂಪು ವಿಶ್ವವಿದ್ಯಾಲಯದ ಸಿಂಡಿಕೇಟಿನ ಸಭೆಗೆ ಹಣಕಾಸು ಅಧಿಕಾರಿಗಳು ಭಾಗವಹಿಸುತ್ತಿರುವ ಬಗ್ಗೆ ಸರ್ಕಾರವು ಅಭಿಪ್ರಾಯ ಕೋರಿರುವ ಬಗ್ಗೆ-<br><br>ವಿಶ್ವವಿದ್ಯಾಲಯಗಳ ಸಿಂಡಿಕೇಟ್ ಸಭೆಗಳಿಗೆ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚೆಗಳು ಹಾಗೂ ಅವಶ್ಯಕತೆಯಿದ್ದಲ್ಲಿ ಮಾತ್ರ ಹಣಕಾಸಿನ ಅಧಿಕಾರಿಗಳನ್ನು ಸಿಂಡಿಕೇಟ್ ಸಭೆಗೆ ಆಹ್ವಾನಿಸಬಹುದೆಂದು ಸಲಹೆ ನೀಡಲಾಯಿತು. | ಸರ್ಕಾರದ ಪತ್ರ ಸಂಖ್ಯೆ. ಇಡಿ 12 ಯುಜಿವಿ 2019 ದಿನಾಂಕ:03.08.2019 ರಲ್ಲಿ ಈ ಕುರಿತು ಕ್ರಮವಹಿಸಲಾಗಿದೆ. |
| 9 | ಕುಲಸಚಿವರು, ಗುಲಬರ್ಗಾ ವಿಶ್ವವಿದ್ಯಾಲಯ ಇವರು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ "High Energy Molecules (Skill Development Course) Certificate ಕೋರ್ಸ್‌ನ್ನು" ಪ್ರಾರಂಭಿಸುವ ಕುರಿತು ಸಲ್ಲಿಸಿರುವ ಮನವಿ ಬಗ್ಗೆ-<br><br>ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ "High Energy Molecules (Skill Development Course) Certificate ಕೋರ್ಸ್‌ನ್ನು" ಯು.ಜಿ.ಸಿ ಹಾಗೂ ರಾಜ್ಯ ಸರ್ಕಾರದ ನಿಯಮಾವಳಿಗಳನುಸಾರ ಪ್ರಾರಂಭಿಸಲು ಸಲಹೆ ನೀಡಲಾಯಿತು. | ಸರ್ಕಾರದ ಪತ್ರ ಸಂಖ್ಯೆ. ಇಡಿ 232 ಯುಜಿವಿ 2019 ದಿನಾಂಕ:05.09.2019 ರಲ್ಲಿ ಈ ಕುರಿತು ಗುಲ್ಬರ್ಗ ವಿಶ್ವವಿದ್ಯಾಲಯಕ್ಕೆ ಸೂಚನೆಗಳನ್ನು ನೀಡಲಾಗಿದೆ. |

| | | |
|---|---|---|
| 10 | ಯು.ಜಿ.ಸಿ ರೂಪಿಸಿರುವ ಸಿ.ಬಿ.ಸಿ.ಎಸ್ ಪಠ್ಯ ವಿನ್ಯಾಸದಲ್ಲಿ ಕನ್ನಡ ಪಠ್ಯ ಕ್ರಮ ರೂಪಿಸಿರುವ ಹಾಗೂ ಕನ್ನಡ ಭಾಷಾ ಬೋಧನೆಗೆ ಉಂಟಾಗಿರುವ ತೊಡಕನ್ನು ಸರಿಪಡಿಸುವ ಬಗ್ಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರು ಬರೆದಿರುವ ಪತ್ರದ ಕುರಿತು-<br><br>ಸದರಿ ವಿಷಯದ ಕುರಿತು ಎಲ್ಲಾ ವಿದ್ಯಾರ್ಥಿಗಳಿಗೆ ಕಲಿಕೆಗೆ ಅನುಕೂಲವಾಗುವಂತೆ ಭಾಷೆಯ ಆಯ್ಕೆಗೆ ವಿದ್ಯಾರ್ಥಿಗಳ ಅಪೇಕ್ಷೆಯಂತೆ ಅವಕಾಶ ನೀಡಿ ಮುಂದುವರೆಸುವಂತೆ ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ |
| 11 | ಕೂಡಲಸಂಗಮದಲ್ಲಿ ವಚನ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಕುರಿತು-<br><br>ಕೂಡಲಸಂಗಮದಲ್ಲಿ ವಚನ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಕುರಿತ ಪ್ರಸ್ತಾವನೆಯನ್ನು ಪ್ರಸ್ತಾವನೆಯನ್ನು ಕೈಬಿಡುವಂತೆ ಸಭೆಯ ಅಭಿಪ್ರಾಯದಂತೆ ಸಲಹೆ ನೀಡಲಾಯಿತು. | ಸಲಹೆಯನ್ನು ಪರಿಗಣಿಸಲಾಗಿದೆ |
| 12 | Guidelines for Development of Women's Studies Centres in Indian Universities and Colleges, 2019-<br><br>ಯು.ಜಿ.ಸಿ ಯು ಹೊರಡಿಸಿರುವ "Guidelines for Development of Women's Studies Centres in Indian Universities and Colleges, 2019" ರಲ್ಲಿ ಸೂಚಿಸಿರುವಂತೆ ಎಲ್ಲಾ ವಿಶ್ವವಿದ್ಯಾಲಯಗಳು ಹಾಗೂ ಕಾಲೇಜುಗಳು ಕ್ರಮವಹಿಸುವಂತೆ ಸಲಹೆ ನೀಡಲಾಯಿತು. | ಸರ್ಕಾರದ ಆದೇಶ ಸಂಖ್ಯೆ.ಇಡಿ 286 ಯುಎನ್‌ಇ 2019 ದಿನಾಂಕ:19.12.2019 ರಲ್ಲಿ ಎಲ್ಲಾ ವಿಶ್ವವಿದ್ಯಾಲಯಗಳಿಗೆ ಸೂಚನೆಗಳನ್ನು ನೀಡಲಾಗಿದೆ. |
| 13 | ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಪ್ರತಿಮೆಗಳನ್ನು ಸ್ಥಾಪಿಸುವ ಬಗ್ಗೆ-<br>ವಿಶ್ವವಿದ್ಯಾಲಯಗಳಲ್ಲಿ ಹಿಂದಿನಿಂದಲೂ ಸ್ಥಾಪಿತಗೊಂಡಿರುವ ವಿಗ್ರಹಗಳನ್ನು ಹೊರತುಪಡಿಸಿ, ಇನ್ನು ಮುಂದೆ ವಿಶ್ವವಿದ್ಯಾಲಯಗಳಲ್ಲಿ ಸರಸ್ವತಿ ವಿಗ್ರಹವನ್ನು ಬಿಟ್ಟು ಬೇರೆ ಯಾವುದೇ ವಿಗ್ರಹಗಳನ್ನು ಸ್ಥಾಪಿಸಬಾರದೆಂದು ತೀರ್ಮಾನಿಸಿ, ಹಾಗೂ ಇನ್ನು ಮುಂದೆ ಕಡ್ಡಾಯವಾಗಿ ಸರ್ಕಾರದ ಅನುಮತಿಯೊಂದಿಗೆ ಸ್ಥಾಪಿಸಬೇಕೆಂಬ ನಿರ್ಣಯದ ಹಿನ್ನೆಲೆಯಲ್ಲಿ ಅದರಂತೆ ಕ್ರಮವಹಿಸುವಂತೆ ಸಲಹೆ ನೀಡಿಲಾಯಿತು. | ಸರ್ಕಾರದ ಪತ್ರಸಂಖ್ಯೆ:ಇಡಿ 303 ಯುಎನ್‌ಇ 2019, ದಿನಾಂಕ:24.01.2020ರಲ್ಲಿ ಎಲ್ಲಾ ವಿಶ್ವವಿದ್ಯಾಲಗಳಿಗೆ ಸೂಚನೆಗಳನ್ನು ನಿಡಲಾಗಿದೆ |
| 14 | ರಾಜ್ಯದಲ್ಲಿನ ಉನ್ನತ ಶಿಕ್ಷಣದ ಅನುಪಾತವನ್ನು ಹೆಚ್ಚಿಸುವ ಬಗ್ಗೆ ತಜ್ಞರ ಸಮಿತಿಯು ನೀಡಿರುವ ವರದಿ ಬಗ್ಗೆ-<br>ರಾಜ್ಯದಲ್ಲಿನ ಉನ್ನತ ಶಿಕ್ಷಣದ ಅನುಪಾತವನ್ನು ಹೆಚ್ಚಿಸುವ ಬಗ್ಗೆ ತಜ್ಞರ ಸಮಿತಿಯು ನೀಡಿರುವ ವರದಿಯ ಬಗ್ಗೆ ಸುದೀರ್ಘವಾಗಿ ಚರ್ಚಿಸಿ ಎಲ್ಲಾ ವಿದ್ಯಾರ್ಥಿಗಳಿಗೂ ಚತ್ತಿಸ್‌ಗಡ್ ರಾಜ್ಯದಲ್ಲಿರುವ single window system ಮಾದರಿಯಲ್ಲೇ ವಿದ್ಯಾರ್ಥಿಗಳು ಎಲ್ಲಿ ಬಯಸುತ್ತಾರೊ ಅಲ್ಲಿ ಪ್ರವೇಶಾತಿಯನ್ನು ನೀಡಿ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡುವಂತೆ ಹಾಗೂ ಒಂದು ವಿಶ್ವವಿದ್ಯಾಲಯದಿಂದ ಮತ್ತೊಂದು ವಿಶ್ವವಿದ್ಯಾಲಯಕ್ಕೆ ಪ್ರವೇಶಾತಿಯನ್ನು ಹಾಲಿ ಇರುವುದಕ್ಕಿಂತ ಶೇ 10% ವರೆಗೆ ಹೆಚ್ಚಿಸಲು ಅನುವುಮಾಡಿಕೊಡಬೇಕೆಂದು ಸಲಹೆ ನೀಡಲಾಯಿತು | ಸರ್ಕಾರದ ಪತ್ರಸಂಖ್ಯೆ:ಇಡಿ 305 ಯುಎನ್‌ಇ 2019, ದಿನಂಕ:24.01.2020ರಲ್ಲಿ ಎಲ್ಲಾ ವಿಶ್ವವಿದ್ಯಾಲಯಗಳಿಗೂ ನಿರ್ದೇಶನಗಳನ್ನು ನೀಡಲಾಗಿದೆ |

| | | |
|---|---|---|
| 15 | ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿಶ್ವವಿದ್ಯಾಲಯಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ವಿದೇಶಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಅನುಕೂಲವಾಗಲು ಡಾ.ಬಿ.ಆರ್.ಅಂಬೇಡ್ಕರ್ ಹೆಸರಿನಲ್ಲಿ ಶಿಷ್ಯವೇತನವನ್ನು ಪ್ರಾರಂಭಿಸಲು ಅಗತ್ಯ ಮಾರ್ಗಸೂಚಿಗಳನ್ನು ರಚಿಸುವ ಬಗ್ಗೆ-<br><br>ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ವಿಶ್ವವಿದ್ಯಾಲಯಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ವಿದೇಶಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಅನುಕೂಲವಾಗಲು ಡಾ.ಬಿ.ಆರ್.ಅಂಬೇಡ್ಕರ್ ಹೆಸರಿನಲ್ಲಿ ಶಿಷ್ಯವೇತನವನ್ನು ಪ್ರಾರಂಭಿಸಲು ಅಗತ್ಯ ಮಾರ್ಗಸೂಚಿಗಳನ್ನು ರಚಿಸುವ ಬಗ್ಗೆ ಪರಿಶೀಲಿಸಿ ವರದಿ ನೀಡಲು ತಜ್ಞರ ಸಮಿತಿಯನ್ನು ರಚಿಸಲು ಸಭೆಯಲ್ಲಿ ತೀರ್ಮಾನಿಸಿದಂತೆ ಸಮಿತಿಯನ್ನು ರಚಿಸಲಾಗಿದೆ. | ಸಭೆಯ ತೀರ್ಮಾನದಂತೆ ಸಮಿತಿ ರಚಿಸಲಾಗಿದೆ |
| 16 | ವಿಶ್ವವಿದ್ಯಾಲಯಗಳಲ್ಲಿ ಹಾಗೂ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಿಗೆ ನೀಡುತ್ತಿರುವ ವೇತನ/ಸಂಭಾವನೆಯ ವರದಿಗಳ ಕುರಿತು ಹಾಗೂ ವಿಶ್ವವಿದ್ಯಾಲಯಗಳಲ್ಲಿ ಅತಿಥಿ ಉಪನ್ಯಾಸಕರ ನೇಮಕಾತಿ ಬಗ್ಗೆ - ತಜ್ಞರ ಸಮಿತಿಯು ಸಲ್ಲಿಸಿರುವ ವರದಿಯ ಕುರಿತು.<br><br>ವಿಶ್ವವಿದ್ಯಾಲಯಗಳಲ್ಲಿ ಹಾಗೂ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಿಗೆ ನೀಡುತ್ತಿರುವ ವೇತನ/ಸಂಭಾವನೆಯ ವರದಿಗಳ ಕುರಿತು ಹಾಗೂ ವಿಶ್ವವಿದ್ಯಾಲಯಗಳಲ್ಲಿ ಅತಿಥಿ ಉಪನ್ಯಾಸಕರ ನೇಮಕಾತಿ ಬಗ್ಗೆ ತಜ್ಞರ ಸಮಿತಿಯು ಸಲ್ಲಿಸಿರುವ ವರದಿಯನ್ನು ಚರ್ಚಿಸಿ ಸಭೆ ತೀರ್ಮಾನದಂತೆ ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತರು ಮತ್ತು ವಿಶ್ವವಿದ್ಯಾಲಯಗಳು ಮತ್ತೊಮ್ಮೆ ಪರಿಶೀಲಿಸಲು ಸೂಚಿಸಿದಂತೆ ಕ್ರಮವಹಿಸಲಾಗಿದೆ. | ಸಭೆಯ ತೀರ್ಮಾನದಂತೆ ಸಮಿತಿ ರಚಿಸಲಾಗಿದೆ |
| 17 | ಪದವಿ ಶಿಕ್ಷಣದಲ್ಲಿ ಜಾನಪದ ವಿಷಯವನ್ನು ಐಚ್ಛಿಕ ವಿಷಯವನ್ನಾಗಿ ಅಳವಡಿಸುವ ಬಗ್ಗೆ ಕರ್ನಾಟಕ ಜಾನಪದ ಜಾಗೃತಿ ವೇದಿಕೆ ಸಲ್ಲಿಸಿರುವ ಮನವಿಯ ಮೇರೆಗೆ ಸೂಕ್ತ ನಿರ್ದೇಶನ ನೀಡುವಂತೆ ಕಾಲೇಜು ಶಿಕ್ಷಣ ಆಯುಕ್ತರು ಕೋರಿರುವ ಕುರಿತು. ಹಾಗೂ<br>2) ಸರ್ಕಾರದ ಪತ್ರ ಸಂಖ್ಯೆ: ಇಡಿ 130 ಯುಎನ್ಇ 2019 ದಿನಾಂಕ:20-08-2019 ರಲ್ಲಿ ಕರ್ನಾಟಕ ಜಾನಪದ ಪದವೀದರರ ಸಂಘ ಇವರು ಪದವಿ ಶೈಕ್ಷಣಿಕ ಹಂತದಲ್ಲಿ ಜಾನಪದ ವಿಷಯವನ್ನು ಐಚ್ಛಿಕವಾಗಿ ಅಳವಡಿಸಿಕೊಳ್ಳುವ ಬಗ್ಗೆ ವರದಿ/ಅಭಿಪ್ರಾಯ ಕೋರಿರುವ ಕುರಿತು–<br>ಜಾನಪದ ವಿಶ್ವವಿದ್ಯಾಲಯಗಳಿಗೆ ಶಕ್ತಿ ತುಂಬುವುದಲ್ಲದೆ ನಮ್ಮ ಜಾನಪದ ಸಂಸ್ಕೃತಿಯನ್ನು ಉಳಿಸಿ, ಬೆಳೆಸುವ ಕಾರ್ಯವಾಗಬೇಕೆಂದು ಈ ದಿಸೆಯಲ್ಲಿ ಆಯಾ ವಿಶ್ವವಿದ್ಯಾಲಯಗಳು ತಮ್ಮ Syndicate and Academic Councilಸಭೆಗಳಲ್ಲಿ ಚರ್ಚಿಸಿ ಕ್ರಮ ಕೈಗೊಳ್ಳುವಂತೆ ಸಲಹೆ ನೀಡಲಾಯಿತು. | ಅಗತ್ಯ ಸೂಚನೆಗಳನ್ನು ನೀಡಲಾಗಿದೆ.. |

| | | |
|---|---|---|
| 18 | ಸರ್ಕಾರಿ/ಖಾಸಗಿ/ ಅನುದಾನಿತ ಪದವಿ ಕಾಲೇಜುಗಳಲ್ಲಿ ಜಾನಪದ ವಿಷಯ ಹಾಗೂ ಶಾಲಾ ಕಾಲೇಜುಗಳ ಪಠ್ಯ ಪುಸ್ತಕದಲ್ಲಿ ಸಹಕಾರ ವಿಷಯವನ್ನು ಅಳವಡಿಸುವ ಕುರಿತು–<br><br>ಸರ್ಕಾರಿ/ಖಾಸಗಿ/ ಅನುದಾನಿತ ಪದವಿ ಕಾಲೇಜುಗಳಲ್ಲಿ ಜಾನಪದ ವಿಷಯ ಹಾಗೂ ಶಾಲಾ ಕಾಲೇಜುಗಳ ಪಠ್ಯ ಪುಸ್ತಕದಲ್ಲಿ ಸಹಕಾರ ವಿಷಯವನ್ನು ಅಳವಡಿಸುವ ಕುರಿತು ಆಯಾ ವಿಶ್ವವಿದ್ಯಾಲಯಗಳು ತಮ್ಮ Syndicate and Academic Councilಸಭೆಗಳಲ್ಲಿ ಚರ್ಚಿಸಿ ಕ್ರಮ ಕೈಗೊಳ್ಳುವಂತೆ ಸಲಹೆ ನೀಡಲಾಯಿತು. | ಅಗತ್ಯ ಸೂಚನೆಗಳನ್ನು ನೀಡಲಾಗಿದೆ.. |
| 19 | ಕರ್ನಾಟಕ ರಾಜ್ಯದಲ್ಲಿ ಬುಡಕಟ್ಟು ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಬಗ್ಗೆ ಸೂಕ್ತ ಪ್ರಸ್ತಾವನೆಯನ್ನು ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸುವಂತೆ ಸರ್ಕಾರದ ಪತ್ರದಲ್ಲಿ ಕೋರಿರುವ ಬಗ್ಗೆ–<br><br>ಬುಡಕಟ್ಟು ಜನಾಂಗದವರು ಹೆಚ್ಚಾಗಿ ಇರುವ ಪ್ರದೇಶಗಳಲ್ಲಿಯೇ ಅಧ್ಯಯನ ಮಾಡಲು ಅವರುಗಳಿಗೆ ಅನುಕೂಲವಾಗುವಂತೆ ವಸತಿ ನಿಲಯಗಳನ್ನು ಕಲ್ಪಿಸಿ, ಹೆಚ್ಚಿನ ಒತ್ತು ಕೊಡಬೇಕೆಂದು ಹಾಗೂ ಈ ಬಗ್ಗೆ ಒಂದು ನಿರ್ಧಿಷ್ಟ ಗುರಿ ಇಟ್ಟುಕೊಂಡು ಕಾರ್ಯರೂಪಕ್ಕೆ ತರಲು ಮತ್ತು ಈ ಬಗ್ಗೆ ಪರಿಶೀಲಿಸಿ ವರದಿ ನೀಡಲು ತಜ್ಞರ ಸಮಿತಿಯನ್ನು ರಚಿಸುವಂತೆ ಸೂಚಿಸಿದ ಹಿನ್ನೆಲೆಯಲ್ಲಿ ವರದಿ ಪಡೆದು ವರದಿಯಂತೆ ಕ್ರಮವಹಿಸಲು ಸಲಹೆ ನೀಡಲಾಗಿದೆ. | ವರದಿಯು ಸರ್ಕಾರದ ಪರಿಶೀಲನೆಯಲ್ಲಿರುತ್ತದೆ |
| 20 | ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಶ್ರೀ ದೇವರ ದಾಸಿಮಯ್ಯ ಅಧ್ಯಯನ ಪೀಠ ಸ್ಥಾಪಿಸುವ ಬಗ್ಗೆ–<br><br>ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಲಭ್ಯವಿರುವ ಸಂಪನ್ಮೂಲದಿಂದ ಶ್ರೀ ದೇವರ ದಾಸಿಮಯ್ಯ ಅಧ್ಯಯನ ಪೀಠ ಸ್ಥಾಪಿಸಲು ಅನುಮೋದಿಸಿರುವ ಹಿನ್ನೆಲೆಯಲ್ಲಿ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿರುವ ಪೀಠಗಳನ್ನು ಗುರುತಿಸಿ ಇವುಗಳನ್ನು ಕಾರ್ಯಗತಗೊಳಿಸುವಂತೆ ಹಾಗೂ ಈ ಬಗ್ಗೆ ವಿಶ್ವವಿದ್ಯಾಲಯ ಪುನರಾವಲೋಕನ ಆಯೋಗವು ಪೀಠಗಳ ಬಗ್ಗೆ ನೀಡಿರುವ ವರದಿಯ ಬಗ್ಗೆ ತೆಗೆದುಕೊಂಡ ಕ್ರಮದ ಕುರಿತು ಎಲ್ಲಾ ವಿಶ್ವವಿದ್ಯಾಲಯಗಳು ಸಂಪೂರ್ಣ ಮಾಹಿತಿಯನ್ನು ಸರ್ಕಾರಕ್ಕೆ ನೀಡಬೇಕೆಂದು ಸಲಹೆ ನೀಡಲಾಯಿತು. | ಕ್ರಮವಹಿಸಲಾಗುತ್ತಿದೆ. |
| 21 | ಸ್ನಾತಕ/ ಸ್ನಾತಕೋತ್ತರ ಹಂತದಲ್ಲಿ ಯಾವುದಾದರೂ ಒಂದು ಕೋರ್ಸಿನಲ್ಲಿ ವೃತ್ತಿಪರ/ ಉದ್ಯೋಗಪರ ವಿಷಯಗಳನ್ನು ಪರಿಚಯಿಸುವ ಕುರಿತು–<br><br>ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಹಾಗೂ ತಮ್ಮ ಬದುಕನ್ನು ರೂಪಿಸಿಕೊಳ್ಳಲು ಉನ್ನತ ಶಿಕ್ಷಣದಲ್ಲಿ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಕಲಿಕೆ ಜೊತೆಗೆ ಉದ್ಯಮ ಸಹಯೋಗ (Industry Collaboration) ದೊಂದಿಗೆ ಪ್ರಥಮ ಆದ್ಯತೆ ನೀಡಿ, ಈಗಿರುವ ಪಠ್ಯಕ್ರಮದಲ್ಲಿ ಇವುಗಳನ್ನು ಅಳವಡಿಸಿಕೊಂಡು ಹಾಗೂ ಎಲ್ಲಾ ವಿಶ್ವವಿದ್ಯಾಲಯಗಳು Center of Excellenceನ್ನು ಪ್ರಾರಂಭ ಮಾಡುವಂತೆ ಸಲಹೆ ನೀಡಲಾಯಿತು. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ . |

| | | |
|---|---|---|
| 22 | ರಾಜ್ಯದ ವಿಶ್ವವಿದ್ಯಾಲಯಗಳಿಂದ ಹಾಗೂ ಕಾಲೇಜು ಶಿಕ್ಷಣ ಇಲಾಖೆಯಿಂದ ನಿಯೋಜನೆಗೊಂಡ/ಅನ್ಯಕಾರ್ಯ ನಿಮಿತ್ತ ಕಾರ್ಯನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಗೆ ಎ.ಪಿ.ಐ ಅಂಕ ನೀಡುವ ಕುರಿತು-<br><br>ರಾಜ್ಯದ ವಿಶ್ವವಿದ್ಯಾಲಯಗಳಿಂದ ಹಾಗೂ ಕಾಲೇಜು ಶಿಕ್ಷಣ ಇಲಾಖೆಯಿಂದ ನಿಯೋಜನೆಗೊಂಡ/ ಅನ್ಯಕಾರ್ಯ ನಿಮಿತ್ತ ಕಾರ್ಯನಿರ್ವಹಿಸುತ್ತಿರುವ ಬೋಧಕ ಸಿಬ್ಬಂದಿಗೆ ಎ.ಪಿ.ಐ ಅಂಕ ನೀಡುವ ಕುರಿತು ತಜ್ಞರ ಸಮಿತಿಯ ವರದಿಯಂತೆ ಕ್ರಮವಹಿಸಲು ಸಲಹೆ ನೀಡಲಾಗಿದೆ. | ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್ತಿನ ನಿರ್ಣಯ/ಸಲಹೆಗಳನ್ನೊಳಗೊಂಡ ನಡವಳಿಗಳನ್ನು ಪರಿಷತ್ತಿನ ಸದಸ್ಯರಾದ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗೂ ಕಾಲೇಜು ಶಿಕ್ಷಣ ಆಯುಕ್ತರಿಗೆ ಅಗತ್ಯ ಕ್ರಮಕ್ಕಾಗಿ ಕಳುಹಿಸಲಾಗಿದೆ. |
| 23 | ರಾಜ್ಯದಲ್ಲಿ ಖಾಸಗಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲು ನಿಗದಿಪಡಿಸಿರುವ ಭೂಮಿಯ ಅಗತ್ಯತೆಯ ಬಗ್ಗೆ ಪುನರ್ ಪರಿಶೀಲಿಸುವ ಬಗ್ಗೆ.<br><br>ರಾಜ್ಯದಲ್ಲಿ ಖಾಸಗಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಹಾಗೂ ಬಿ.ಎಂ.ಆರ್.ಡಿ.ಎ (ಃಃಔಕ಼ಃಔಖಆಂ) ವ್ಯಾಪ್ತಿಯ ಅಧೀನದಲ್ಲಿ ಬರುವ ಎರಡು ಸ್ಥಳಗಳಲ್ಲಿನ (ಖತಿ೦.ರಿಟ್ಲೂ ರಿಜ್ಞುಜ ಡಿ ಟಚಿಟಿಜ) ಭೂಮಿಯು 25 ಎಕರೆಗಿಂತ ಕಡಿಮೆ ಇಲ್ಲದಂತೆ ಹಾಗೂ ಎರಡು ಸ್ಥಳಗಳು ಸೇರಿ ಒಟ್ಟು 25 ಎಕರೆ ಭೂಮಿ ಲಭ್ಯವಿದ್ದಲ್ಲಿ ಅಂತಹ ಪ್ರಸ್ತಾವನೆಗಳನ್ನು ಪರಿಗಣಿಸಲು ಸಭೆಯಲ್ಲಿ ತೀರ್ಮಾನಿಸಿದಂತೆ ಕ್ರಮವಹಿಸುವಂತೆ ಸಲಹೆ ನೀಡಲಾಗಿದೆ. | ಕ್ರಮವಹಿಸಲಾಗುತ್ತಿದೆ |
| 24 | ವಿಶ್ವವಿದ್ಯಾಲಯಗಳಲ್ಲಿ ದೂರಶಿಕ್ಷಣವನ್ನು ನಡೆಸುತ್ತಿರುವ ಕುರಿತು.<br><br>ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದ ಸಿಬ್ಬಂದಿಗಳಿಗೆ ವೇತನಕ್ಕಾಗಿ ವಾರ್ಷಿಕವಾಗಿ ರೂ.40=00 ಕೋಟಿಗಳನ್ನು ಹಣದ ಅವಶ್ಯಕತೆ ಇದ್ದು, ಇದನ್ನು ಕ್ರೋಢೀಕರಿಸುವುದು ಕಷ್ಟವಾಗುತ್ತಿದೆಯೆಂಬ ಸದ್ರಿ ವಿಶ್ವವಿದ್ಯಾಲಯದ ಕುಲಪತಿಗಳು ಅಭಿಪ್ರಾಯವನ್ನು ಪರಿಗಣಿಸಿ, ಈಗ ದೂರ ಶಿಕ್ಷಣವನ್ನು ನೀಡುತ್ತಿರುವ ವಿಶ್ವವಿದ್ಯಾಲಯಗಳು ಸ್ಥಾಪಿಸಿರುವ ಅಧ್ಯಯನ ಕೇಂದ್ರಗಳಲ್ಲಿ ಸಹ, ಮುಕ್ತ ವಿಶ್ವವಿದ್ಯಾಲಯವು ದೂರ ಶಿಕ್ಷಣ ವನ್ನು ನೀಡಿತಕ್ಕದೆಂದು ಹಾಗೂ ಇತರ ವಿಶ್ವವಿದ್ಯಾಲಯಗಳು ದೂರ ಶಿಕ್ಷಣವನ್ನು ನೀಡತಕ್ಕದ್ದಲ್ಲವೆಂದು ಸಭೆಯ ತೀರ್ಮಾನದಂತೆ ಕ್ರಮವಹಿಸಲು ಸಲಹೆ ನೀಡಲಾಗಿದೆ. | ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ಕ್ಕೆ ತಿದ್ದುಪಡಿಸ ತರಲು ಪರಿಶೀಲಿಸಲಾಗುತ್ತಿದೆ |